ಶ್ರೀಪತಿಯಾದ ನಾರಾಯಣನನ್ನು ಪುರುಷಸೂಕ್ತದಿಂದ ಅಭಿಷೇಕ ಮಾಡಬೇಕು. ಶಂಖ ಇಲ್ಲದಿದ್ದರೆ ಗಿಂಡೆ, ಥಾಲಿ, ಮುಂತಾದವುಗಳಲ್ಲಿ ಸುಗಂಧೀ ನೀರು ತುಳಸೀಪತ್ರಗಳನ್ನು ಹಾಕಿ ದೇವರಿಗೆ ಅಭಿಷೇಕವನ್ನು ಮಾಡಿ ಆಸನದ ಮೇಲೆ ಭಗವಂತನನ್ನು ಕೂಡಿಸಿ ಸುಗಂಧಿ ಚಂದನದಿಂದ ಸರ್ವಾಂಗ ಲೇಪವನ್ನು ಮಾಡಬೇಕು. ತುಳಸೀಕಾಷ್ಠದಿಂದ ತೊಯ್ದು ತೆಗೆದ ಸ್ವಾದೋದಕದಿಂದಲೂ ಅಭಿಷೇಕ ಮಾಡಬೇಕು. ಅಭಿಷೇಕ ಅನಂತರ ಶುದ್ಧವಾದ ವಸ್ತ್ರದಿಂದ ವರಸಿ ಆಸನದ ಮೇಲೆ ಕೂಡಿಸಿ ಅರ್ಘ್ಯ ಪಾದ್ಯಾದಿಗಳನ್ನಿತ್ತು ಆವಾಹನೆಗೈದು ಶ್ರೀಗಂಧ ಚಂದನ ತುಳಸೀಕಾಷ್ಠಾದಿಗಳನ್ನು ತಿಕ್ಕಿ ತೆಗೆದ ಗಂಧವನ್ನು ದೇವರಿಗೆ ಲೇಪಿಸಬೇಕು. ತುಳಸಿಯ ಮಾಲೆಯನ್ನು ದೇವರ ಕೊರಳಲ್ಲಿ ಹಾಕಬೇಕು. ಪೌರಾಣಿಕ ಮಂತ್ರಗಳಿಂದ ದಿಗ್ಬಂಧನ ಮಾಡಬೇಕು.

**ಕೃಷ್ಣೋ ರಕ್ಷತು ಪೂರ್ವಸ್ಯಾಮಾಗ್ನೇಯ್ಯಾಂ ದೇವಕೀಸುತಃ ।**
**ಯಾಮ್ಯಾಂ ರಕ್ಷತು ದೈತ್ಯಾರಿರ್ನೈರ್ಋತ್ಯಾಂ ಮಧುಸೂದನಃ ॥**

**ವಿದಿಕ್ಷು ರಕ್ಷತು ಶ್ರೀಮಾನ್ ಊರ್ಧ್ವಂ ಚ ಶ್ರೀಧರಃ ಪ್ರಭುಃ ।**
**ಅಧೋ ರಕ್ಷತು ವಿಶ್ವಾತ್ಮಾ ಕೂರ್ಮಮೂರ್ತಿಃ ಕೃಪಾಮಯಃ ॥**

**ಯೇ ವಿಘ್ನಕಾರಕಾಃ ಸರ್ವೇ ಪೂಜಾಕಾಲೇ ಭವಂತಿ ಹಿ ।**
**ದೂರಂ ಗಚ್ಛಂತು ತೇ ಸರ್ವೇ ಹರಿನಾಮಾಸ್ತ್ರತಾಡಿತಃ ॥**

ಈ ಮಂತ್ರದಿಂದ ದಿಗ್ಬಂಧನವನ್ನೂ ಮಾಡಿ ಅನಂತರ ಕೈ ಮುಗಿದು

**ಮಯಾರಭ್ಯಾಂ ಇಮಾಂಪೂಜಾಂ ದೇವ ದೇವ ಜನಾರ್ದನ ।**
**ಸಿದ್ಧಿ ಪ್ರಾಪಯ ನಿರ್ವಿಘ್ನಂ ಪ್ರಸೀದ ಪರಮೇಶ್ವರ ॥**

ಎಂದು ಮಂತ್ರ ಹೇಳಿದ ಕೂಡಲೇ ಸಂಕಲ್ಪ ಮಾಡಬೇಕು. ಅನಂತರ ಅಂಗನ್ಯಾಸಾದಿಗಳನ್ನು ಮಾಡಿ ನಾರಾಯಣನನ್ನು ಮನಸ್ಸಿನಿಂದ ಧ್ಯಾನ ಮಾಡಬೇಕು.

**ನವೀನ ಮೇಘ ಸಂಕಾಶಂ ಪುಂಡಲೀಕ ನಿಭೇಕ್ಷಣಂ ।**
**ಪೀತಾಂಬರ ಧರಂ ದೇವಂ ಸ್ಮಿತಚಾರು ತರಾನನಂ ॥**

**ಕದಂಬ ಪುಷ್ಪ ಮಾಲಾಭಿಭೂಷಿತಂ ಸುಮಹಾಭುಜಂ ।**
**ಬರ್ಹಿ ಬರ್ಹ ಶ್ರೇಣಿಬದ್ಧ ಶಿಖಂಡಿಧೃತ ಕುಂಡಲಂ ॥**

**ವಂಶೀ ಮಧುರ ನಾ ದೇವ ಮೋಹಯಂತಂ ದಿಶೋದಶ ।**
**ಆವೃತಂ ಗೋಪನಾರೀಭಿಶ್ಚಾರುವೃಂದಾವನೇ ಸ್ಥಿತಂ ॥**

**ಏವಂ ಸಂಚಿಂತ್ಯ ಮನಸಾ ಗೋವಿಂದಂ ಸರ್ವಕಾಮದಂ ।**
**ತತಶ್ಚಾವಾಹನಂ ಕುರ್ಯಾತ್ ಭಕ್ತಿಭಾವೇನ ವೈಷ್ಣವಃ ॥**

ನೀರು ತುಂಬಿದ ಮೋಡದಂತೆ ನೀಲವರ್ಣದ ಪೀತಾಂಬರವನ್ನುಟ್ಟ, ತಾವರೆಗಣ್ಣಿನ ಮುಗುಳು ನಗೆ ಬೀರುವ, ಕದಂಬ ಹೂವಿನ ಮಾಲೆಯಿಂದ ಭೂಷಿತನಾದ ನವಿಲುಗರಿಯಿಂದ ಅಲಂಕೃತವಾದ ಶಿರೋಭರಣವುಳ್ಳ ಮಧುರ ಮುರಲೀನಾದದಿಂದ